# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1732 |
| 2) | ಮಾನ್ಯ ಸದಸ್ಯರ ಹೆಸರು | ಡಾ: ಚಂದ್ರಶೇಖರ್ ಬಿ.ಪಾಟೀಲ್ (ಪದವೀಧರರ ಕ್ಷೇತ್ರ) |
| 3) | ಉತ್ತರಿಸಬೇಕಾದ ದಿನಾಂಕ | 22/03/2021 |
| 4) | ಉತ್ತರಿಸುವವರು | ಉಪ ಮುಖ್ಯಮಂತ್ರಿಗಳು ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆ ಸಚಿವರು |

************

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೈಗಾರಿಕಾ ತರಬೇತಿ ಮತ್ತು ಉದ್ಯೋಗ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ಅನುದಾನಿತ ನೌಕರರಿಗೆ, ಬೇರೆ ಇಲಾಖೆಯ ಅನುದಾನಿತ ಶಿಕ್ಷಣ ಸಂಸ್ಥೆಯಲ್ಲಿರುವ ಎಲ್ಲಾ ಸೌಲಭ್ಯವನ್ನು ಯಥಾವತ್ತಾಗಿ ಜಾರಿಗೊಳಿಸುವಲ್ಲಿ ವಿಳಂಬ ನೀತಿ ಏಕೆ; | (1) ಸರ್ಕಾರಿ ಆದೇಶ ಸಂಖ್ಯೆ: ಕಾಇ 303 ಇಟಿಐ 2014 ಬೆಂಗಳೂರು ದಿನಾಂಕ: 29-12-2014 ರ ಆದೇಶದಂತೆ ಈ ಕೆಳಕಂಡ ಸೇವಾ ಸೌಲಭ್ಯಗಳು ಹಾಗೂ ಸೇವಾ ನಿಯಮಗಳನ್ನು ಖಾಸಗಿ ಅನುದಾನಿತ ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿ ದಿನಾಂಕ: 01-04-2006 ರ ಪೂರ್ವದಲ್ಲಿ ನೇಮಕಾತಿ ಹೊಂದಿದ ಸಿಬ್ಬಂದಿಗಳಿಗೆ ಭವಿಷ್ಯಾವರ್ತಿಯಾಗಿ ಸೌಲಭ್ಯಗಳನ್ನು ನೀಡಲು ಮಂಜೂರಾತಿ ನೀಡಿದೆ.<br>(i) ಪಿಂಚಣಿ<br>(ii) ಗ್ರ್ಯಾಚ್ಯುಯಿಟಿ<br>(2) ಸರ್ಕಾರಿ ಆದೇಶ ಸಂಖ್ಯೆ: ಕಾಇ 303 ಇಟಿಐ 2014 ಬೆಂಗಳೂರು ದಿನಾಂಕ: 14-11-2016 ರಂತೆ ಈ ಕೆಳಕಂಡ ಸೇವಾ ಸೌಲಭ್ಯಗಳನ್ನು ನೀಡಲು ಮಂಜೂರಾತಿ ನೀಡಿದೆ.<br>(i) ಪಿಂಚಣಿ<br>(ii) ಕುಟುಂಬ ಪಿಂಚಣಿ<br>(iii) ಗ್ರ್ಯಾಚ್ಯುಯಿಟಿ (ನಿವೃತ್ತಿ) ಉಪದಾನ/ಡಿ.ಸಿ.ಆರ್.ಜಿ. (ಮರಣ ಉಪದಾನ)<br>(iv) ಗಳಿಕೆ ರಜೆ ನಗದೀಕರಣ (ನಿವೃತ್ತಿ ನಂತರ)<br>(v) ಪರಿವರ್ತಿತ ಪಿಂಚಣಿ<br>(vi) 10 ವರ್ಷಗಳ ಕಾಲಬದ್ಧ ವೇತನ ಮುಂಬಡ್ತಿ, 15 ವರ್ಷಗಳ ಸ್ವಯಂಚಾಲಿತ ವೇತನ ಮುಂಬಡ್ತಿ ಮತ್ತು 20-25 ವರ್ಷಗಳ ಹೆಚ್ಚುವರಿ ವೇತನ ಬಡ್ತಿ<br><br>1997ರ ಅನುದಾನ ಸಂಹಿತೆಯು ಪರಿಷ್ಕರಣೆ ಹಂತದಲ್ಲಿದೆ. |
| ಆ) | ಕೈಗಾರಿಕಾ ತರಬೇತಿ ಮತ್ತು ಉದ್ಯೋಗ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ಅನುದಾನಿತ ನೌಕರರಿಗೆ ಕಾಲ್ಪನಿಕ ವೇತನವನ್ನು ಮಂಜೂರು ಮಾಡುವ ಉದ್ದೇಶ ಸರ್ಕಾರದ ಮುಂದೆ ಇದೆಯೇ; | ಕಾಲ್ಪನಿಕ ವೇತನ ಮಂಜೂರಾತಿಗಾಗಿ ಕೋರಿ ಯಾವುದೇ ಪ್ರತ್ಯೇಕ ಪ್ರಸ್ತಾವನೆಗಳು ಸ್ವೀಕೃತವಾಗಿರುವುದಿಲ್ಲ. |
| ಇ) | ಗ್ರೈಂಡಿಗ್ ನಲ್ಲಿ ಅತಿ ಹೆಚ್ಚು ಅಂಕ ಮಾಡಿದ ಕೈಗಾರಿಕಾ ತರಬೇತಿ ಸಂಸ್ಥೆಗೆ ಕೇಂದ್ರ ಮತ್ತು ರಾಜ್ಯ ಸರ್ಕಾರದ ವತಿಯಿಂದ ಪ್ರೋತ್ಸಾಹಧನ ಒದಗಿಸಲಾಗುತ್ತಿದೆಯೇ? | ಪ್ರೋತ್ಸಾಹಧನ ನೀಡಲಾಗುತ್ತಿರುವುದಿಲ್ಲ. |

**ಸಂಖ್ಯೆ: ಕೌಉಜೀಇ 28 ಕೈತಪ್ರ 2021**

(ಡಾ.ಸಿ.ಎನ್.ಅಶ್ವಥ ನಾರಾಯಣ)
ಉಪ ಮುಖ್ಯಮಂತ್ರಿಗಳು ಹಾಗೂ
ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು
ಜೀವನೋಪಾಯ ಸಚಿವರು